# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 709 (802)
ಸದಸ್ಯರ ಹೆಸರು : ಶ್ರೀ ಆರ್. ಪ್ರಸನ್ನಕುಮಾರ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 09-03-2021
ಉತ್ತರಿಸುವ ಸಚಿವರು : ಮಾನ್ಯ ನಗರಾಭಿವೃದ್ಧಿ ಸಚಿವರು

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಶಿವಮೊಗ್ಗ ಜಿಲ್ಲೆಗೆ ಸ್ಮಾರ್ಟ್ ಸಿಟಿ ಕಂಪನಿಯ ಯೋಜನೆಯಡಿ ಬಿಡುಗಡೆಯಾದ ಅನುದಾನ ಎಷ್ಟು; ಹಾಗೂ ಸದರಿ ಯೋಜನೆಯ ಅನುಷ್ಠಾನವು ಯಾವ ಹಂತದಲ್ಲಿದೆ' | ಶಿವಮೊಗ್ಗ ಸ್ಮಾರ್ಟ್ ಸಿಟಿ ಯೋಜನೆಗೆ ಸರ್ಕಾರದಿಂದ ಇಲ್ಲಿಯವರೆಗೆ ರೂ.307.00 ಕೋಟಿ (ಕೇಂದ್ರ ಸರ್ಕಾರದಿಂದ ರೂ.196.00 ಕೋಟಿ, ರಾಜ್ಯದಿಂದ ರೂ.111.00 ಕೋಟಿ) ಬಿಡುಗಡೆಯಾಗಿರುತ್ತದೆ. ಯೋಜನಾ ಅನುಷ್ಠಾನಕ್ಕಾಗಿ ಇಲ್ಲಿಯವರೆಗೆ ಒಟ್ಟು ರೂ.242.83 ಕೋಟಿ ಆರ್ಥಿಕ ಪ್ರಗತಿ ಸಾಧಿಸಲಾಗಿರುತ್ತದೆ.<br><br>ಶಿವಮೊಗ್ಗ ಸ್ಮಾರ್ಟ್ ಸಿಟಿ ಲಿಮಿಟೆಡ್ ವತಿಯಿಂದ ಸ್ಮಾರ್ಟ್ ಸಿಟಿ ಅನುದಾನದಡಿ ಹಾಗೂ ಪಿಪಿಪಿ ಯೋಜನೆಯಡಿ ಒಟ್ಟು ರೂ.1047.84 ಕೋಟಿ ಮೊತ್ತದ 57 ಕಾಮಗಾರಿಗಳನ್ನು ಪ್ರಸ್ತಾಪಿಸಲಾಗಿದ್ದು, ಇಲ್ಲಿಯವರೆಗೆ ರೂ.29.36 ಕೋಟಿ ಮೊತ್ತದ 14 ಕಾಮಗಾರಿಗಳನ್ನು ಪೂರ್ಣಗೊಳಿಸಲಾಗಿದ್ದು, ರೂ.846.00 ಕೋಟಿ ಮೊತ್ತದ 38 ಕಾಮಗಾರಿಗಳು ಪ್ರಗತಿಯಲ್ಲಿರುತ್ತವೆ ಹಾಗೂ ರೂ.146.40 ಕೋಟಿ ಮೊತ್ತದ 4 ಕಾಮಗಾರಿಗಳು ಟೆಂಡರ್ ಹಂತದಲ್ಲಿದ್ದು, ಉಳಿದ 1 ಕಾಮಗಾರಿ (ರೂ.26.06 ಕೋಟಿ ) ಗೆ ವಿಸ್ತೃತಾ ಯೋಜನಾ ವರದಿಯನ್ನು ಅಂತಿಮಗೊಳಿಸಲಾಗುತ್ತಿದೆ. |
| ಆ | ಸ್ಮಾರ್ಟ್ ಸಿಟಿ ಕಂಪನಿಯ ಆಡಳಿತ ವ್ಯವಸ್ಥೆಗೆ ಒಂದು ಕಂಪನಿಗೆ ತಿಂಗಳೊಂದಕ್ಕೆ ತಗಲುವ ವೆಚ್ಚವೆಷ್ಟು; (ವಿವರ ನೀಡುವುದು) | ಶಿವಮೊಗ್ಗ ಸ್ಮಾರ್ಟ್ ಸಿಟಿ ಲಿಮಿಟೆಡ್ ಕಂಪನಿಯ ಆಡಳಿತ ವ್ಯವಸ್ಥೆಗೆ ಮಾಹೆಯಾನ ಅಂದಾಜು ರೂ.46.00 ಲಕ್ಷ ವೆಚ್ಚವಾಗುತ್ತಿದೆ. |
| ಇ | ಸ್ಮಾರ್ಟ್ ಸಿಟಿಯಲ್ಲಿ ಕೈಗೊಳ್ಳುವ ಕಾಮಗಾರಿ ಸ್ಥಳೀಯ ಆಡಳಿತ ಸಂಸ್ಥೆಗೆ ಸಂಬಂಧ ಇಲ್ಲವೆಂಬ ದೂರುಗಳಿದ್ದು, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು? | ಸ್ಮಾರ್ಟ್‌ಸಿಟಿ ಅಭಿಯಾನದ ಮಾರ್ಗಸೂಚಿಯಂತೆ ಆಯಾ ನಗರಗಳು ಸ್ಮಾರ್ಟ್ ಸಿಟಿ ಪ್ರಸ್ತಾವನೆಗಳನ್ನು ಚುನಾಯಿತ ಪ್ರತಿನಿಧಿಗಳೊಂದಿಗೆ, ಸಾರ್ವಜನಿಕರೊಂದಿಗೆ, ವಿವಿಧ ಕ್ಷೇತ್ರಗಳಲ್ಲಿ ಪರಿಣಿತಿ ಹೊಂದಿರುವ ತಜ್ಞರೊಂದಿಗೆ ಹಾಗೂ ಸರ್ಕಾರೇತರ ಸಂಸ್ಥೆಗಳೊಂದಿಗೆ ಸಮಾಲೋಚಿಸಿ ಪ್ರಸ್ತಾವನೆಗಳನ್ನು ಸಿದ್ಧಪಡಿಸಿರುತ್ತವೆ. ಹೀಗೆ ಸಿದ್ಧಪಡಿಸಿದ ಪ್ರಸ್ತಾವನೆಗಳಿಗೆ ಆಯಾ ನಗರ ಸ್ಥಳೀಯ ಸಂಸ್ಥೆಗಳ ಕೌನ್ಸಿಲ್ ಸಭೆಗಳು ಸ್ಮಾರ್ಟ್ ಸಿಟಿ ಯೋಜನೆಯಲ್ಲಿ ಕೈಗೊಳ್ಳಬೇಕಾದ ಕಾಮಗಾರಿಗಳಿಗೆ ಅನುಮೋದನೆ ನೀಡಿರುತ್ತವೆ. ಆನಂತರದಲ್ಲಿ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಸಹ ಸದರಿ ಕ್ರಿಯಾ ಯೋಜನೆಗೆ ಅನುಮೋದನೆ ನೀಡಿರುತ್ತವೆ.<br><br>ಮುಂದುವರೆದು, ಸ್ಮಾರ್ಟ್ ಸಿಟಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಸ್ಥಾಪಿಸಲಾಗಿರುವ ವಿಶೇಷ ಉದ್ದೇಶಿತ ವಾಹನಗಳ ನಿರ್ದೇಶಕರ ಮಂಡಳಿಯಲ್ಲಿ ಆಯಾ ನಗರ |

| | | |
|---|---|---|
| | | ಸ್ಥಳೀಯ ಸಂಸ್ಥೆಗಳ ಮಹಾಪೌರರು, ಆಯುಕ್ತರು ಒಳಗೊಂಡಂತೆ ಕೌನ್ಸಿಲ್ ಸಭೆಯಿಂದ ಆರು (6) ನಾಮನಿರ್ದೇಶನಗೊಂಡ ಸದಸ್ಯರಿರುತ್ತಾರೆ.<br><br>ಅಲ್ಲದೇ ಎಲ್ಲಾ ನಗರಗಳಲ್ಲಿ ಲೋಕಸಭಾ ಸದಸ್ಯರು, ವಿಧಾನ ಸಭಾ ಸದಸ್ಯರು, ಮಹಾಪೌರರು, ಜಿಲ್ಲಾಧಿಕಾರಿಗಳು, ವ್ಯವಸ್ಥಾಪಕರ ನಿರ್ದೇಶಕರು, ಸ್ಮಾರ್ಟ್ ಸಿಟಿ ಲಿಮಿಟೆಡ್, ತಾಂತ್ರಿಕ ತಜ್ಞರು ಹಾಗೂ ಇತರೆ ಸಂಸ್ಥೆಗಳ ಪ್ರತಿನಿಧಿಗಳನ್ನು ಒಳಗೊಂಡಿರುವ "ನಗರ ಮಟ್ಟದ ಸಲಹಾ ಸಮಿತಿ" (City Level Advisory Forum) ಗಳನ್ನು ರಚಿಸಲಾಗಿರುತ್ತದೆ. ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ಹಾಗೂ ಅನುಷ್ಠಾನಗೊಳಿಸಲು ಈ CLAF ಸಮಿತಿಯ ಮಾರ್ಗದರ್ಶನ ನೀಡುತ್ತಿದೆ.<br><br>ಅಲ್ಲದೇ ವಿಶೇಷ ಉದ್ದೇಶಿತ ವಾಹನಗಳ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನಕ್ಕಾಗಿ ಸ್ಮಾರ್ಟ್ ಸಿಟಿಗಳಲ್ಲಿ ಮಾನ್ಯ ನಗರಾಭಿವೃದ್ಧಿ ಸಚಿವರ ಅಧ್ಯಕ್ಷತೆಯಲ್ಲಿ "ಸ್ಮಾರ್ಟ್ ಸಿಟಿ ಅನುಷ್ಠಾನ ಪರಿಶೀಲನಾ ಸಮಿತಿಯನ್ನು" ರಚಿಸಲಾಗಿದೆ. ಈ ಸಮಿತಿಯಲ್ಲಿ ಮಾನ್ಯ ಜಿಲ್ಲಾ ಉಸ್ತುವಾರಿ ಸಚಿವರು ಸಹ-ಅಧ್ಯಕ್ಷರಾಗಿದ್ದು, ಸಂಸತ್ ಸದಸ್ಯರು, ರಾಜ್ಯ ವಿಧಾನ ಸಭಾ ಸದಸ್ಯರು, ಮಹಾಪೌರರು, ಜಿಲ್ಲಾಧಿಕಾರಿಗಳು, ಮಹಾನಗರ ಪಾಲಿಕೆಯ ವಿರೋಧ ಪಕ್ಷದ ನಾಯಕರು, ಅಧ್ಯಕ್ಷರು ನಗರಾಭಿವೃದ್ಧಿ ಪ್ರಾಧಿಕಾರ, ಆಯುಕ್ತರು-ಮಹಾನಗರ ಪಾಲಿಕೆ, ಆಯುಕ್ತರು-ನಗರಾಭಿವೃದ್ಧಿ ಪ್ರಾಧಿಕಾರ ಇವರು ಸದಸ್ಯರುಗಳಾಗಿದ್ದು, ಆಯಾ ನಗರದ ಸ್ಮಾರ್ಟ್ ಸಿಟಿ ಲಿಮಿಟೆಡ್ನ ವ್ಯವಸ್ಥಾಪಕ ನಿರ್ದೇಶಕರು ಸದಸ್ಯ ಸಂಚಾಲಕರಾಗಿರುತ್ತಾರೆ.<br><br>ಕಾಮಗಾರಿಗಳ ಸಮರ್ಪಕ ಅನುಷ್ಠಾನಕ್ಕೆ ಆಯಾ ನಗರಗಳಲ್ಲಿ ಕೈಗೊಳ್ಳಲಾಗುತ್ತಿರುವ ಕಾಮಗಾರಿಗಳ ಅಡೆತಡೆಗಳನ್ನು ನಿವಾರಿಸಲು ಜಿಲ್ಲಾಧಿಕಾರಿಗಳು ಸಮನ್ವಯ ಸಭೆಗಳನ್ನು ಕೈಗೊಳ್ಳುತ್ತಿದ್ದು, ಅಂತಹ ಸಭೆಗಳಲ್ಲಿ ಸ್ಥಳೀಯ ಸಂಸ್ಥೆಯ ಮುಖ್ಯಸ್ಥರು ಭಾಗವಹಿಸಿ ಸಮಸ್ಯೆಗಳ ಇತ್ಯರ್ಥಕ್ಕೆ ಸಹಕರಿಸುತ್ತಾರೆ.<br><br>ಈ ಮೇಲಿನ ಎಲ್ಲಾ ಆಡಳಿತಾತ್ಮಕ ಕ್ರಮಗಳಿಂದಾಗಿ ಎಸ್.ಪಿ.ವಿ ಮತ್ತು ನಗರ ಸ್ಥಳೀಯ ಸಂಸ್ಥೆಗಳು ಜೊತೆಗೂಡಿ ಸ್ಮಾರ್ಟ್ ಸಿಟಿ ಕಾಮಗಾರಿಗಳನ್ನು ಸಮರ್ಪಕವಾಗಿ ಅನುಷ್ಠಾನಗೊಳಿಸುತ್ತಿವೆ. |

ಸಂಖ್ಯೆ:ನಅಇ 42 ಸಿಎಸ್ಎಸ್ 2021

**(ಬಿ.ಎ.ಬಸವರಾಜ)**
ನಗರಾಭಿವೃದ್ಧಿ ಸಚಿವರು